ಒಂದಾಣೆ ಮಾಲೆ 210

# ಶತಪಥ ಬೋಧಾಮೃತ

("ಶತಪಥ ಬ್ರಾಹ್ಮಣ"ದಿಂದ ಸಂಗ್ರಹಿಸಿದುದು)



ಸಂಗ್ರಾಹಕ:
ಶ್ರೀ ವಿಶ್ವೇಶ್ವರ ಶರ್ಮ, ಬಾರ್ಕೂರು.



1958

ಬೆಲೆ: ಆಣೆ ಒಂದು.

ಒಂದಾಣೆ ಮಾಲೆ, ಮಂಗಳೂರು.

# ಪ್ರತಿ ವಾರವೂ ಕೊಂಡುಕೊಳ್ಳಿರಿ!

"ಒಂದಾಣೆ ಮಾಲೆ"ಯ ಪುಸ್ತಕಗಳು, ಪ್ರತಿ ವಾರ ಪ್ರಕಟವಾಗುತ್ತಿವೆ. ಹೊಸ ಹೊಸ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. 1954ನೇ ಸಪ್ಟಂಬರದಿಂದ 1958ನೇ ನವಂಬರ ತಿಂಗಳ ಮೊದಲನೆಯ ವಾರದ ವರೆಗೆ 210 ಪುಸ್ತಕಗಳು ಪ್ರಕಟವಾಗಿದ್ದು, ಇನ್ನೂ ಪ್ರತಿ ವಾರ ಒಂದೊಂದು ಹೊಸ ಪುಸ್ತಕ ಹೊರಡುತ್ತಲೇ ಇದೆ.

210 ಆಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, ಒಟ್ಟು 4186 ಪುಟಗಳನ್ನು ಕೊಟ್ಟಿರುತ್ತದೆ. ಇಷ್ಟು ಮೊಬಲಗಿಗೆ ಇಷ್ಟು ಪುಟಗಳನ್ನು ಬೇರೆ ಎಲ್ಲಿಯೂ ಯಾವ ಪ್ರಕಟಣೆಯೂ ಕೊಟ್ಟಿಲ್ಲ.

ವಿದ್ವಾಂಸರು ಮಾತ್ರ 'ಒಂದಾಣೆಮಾಲೆ'ಗೆ ಬರೆಯುತ್ತಾರೆ. 'ಅಶ್ಲೀಲ' ಎಂಬ ಅಂಶವೇ 'ಒಂದಾಣೆಮಾಲೆ'ಯ ಪ್ರಕಟಣೆಗಳಲ್ಲಿರುವುದಿಲ್ಲ.

'ಒಂದಾಣೆಮಾಲೆ' ಪುಸ್ತಕಗಳು ಚಿಕ್ಕ ವಿದ್ಯಾರ್ಥಿಗಳಿಂದ ವಯೋವೃದ್ಧರ ವರೆಗೆ, ಪ್ರತಿಯೊಬ್ಬನಿಗೂ ಅವಶ್ಯ ಇವೆ. ಇಷ್ಟು ಸುಲಭ ಬೆಲೆಯಲ್ಲಿ ಇಷ್ಟು ಉತ್ತಮ ಸಾಹಿತ್ಯವು, ಈ ಮೊದಲು ಎಲ್ಲಿಯೂ ಒದಗಿಸಲ್ಪಟ್ಟಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳನ್ನು ಟಪ್ಪಾಲು ದ್ವಾರಾ ತರಿಸಿಕೊಳ್ಳುವವರು ರೂ. 4—8-0ನ್ನು ಮನಿಯಾರ್ಡರ್ ಮೂಲಕ ಕಳಿಸತಕ್ಕದ್ದು. ಡಿಪಾಜಿಟ್ ಇಡುವವರು ಮಾತ್ರ ಏಜನ್ಸಿಗಾಗಿ ಬರೆದುಕೊಳ್ಳತಕ್ಕದ್ದು.

ವಾರಕ್ಕೆ ಕೇವಲ ಒಂದಾಣೆ ವ್ಯಯದಿಂದ ಒಂದು ಉತ್ಕೃಷ್ಟ—ಉಪಯುಕ್ತ ಪುಸ್ತಕವನ್ನು ಹೊಂದುವ ಈ ಯೋಜನೆಯ ಸದುಪಯೋಗ ಮಾಡಿಕೊಳ್ಳಿರಿ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ,
ಮಂಗಳೂರು-1.

ANNA PUBLICATIONS, CAR STREET, MANGALORE-1.

# ಶತಪಥ ಬೋಧಾಮೃತ

## ೧. ಸತ್ಯ ಭಾಷಣ

ಅಮೇಧ್ಯೋ ವೈ ಪುರುಷೋ ಭವತಿ ಯದನೃತಂ ವದತಿ ||೧|೧|೧|೧||

ಅಸತ್ಯವನ್ನು ನುಡಿಯುವುದರಿಂದ ಮನುಷ್ಯನು ನಿಶ್ಚಯವಾಗಿ ಅಪವಿತ್ರನಾಗುವನು.

ದ್ವಯಂ ವಾಇ ಇದಂ ನ ತೃತೀಯಮಸ್ತಿ । ಸತ್ಯಂ ಚೈವಾನೃತಂ ಚ ಸತ್ಯಮೇವ ದೇವಾ ಅನೃತಂ ಮನುಷ್ಯಾ ಇದಮಹಮನೃತಾತ್ ಸತ್ಯಮುಪೈಮೀತಿ ತನ್ಮನುಷ್ಯೇಭ್ಯೋ ದೇವಾನುಪೈತಿ ||೧|೧|೧|೪||

ಈ ಜಗತ್ತಿನಲ್ಲಿ ಸತ್ಯ ಮತ್ತು ಅಸತ್ಯವೆಂದು ಎರಡೇ ಇರುವುದಲ್ಲದೆ ಮೂರನೆಯದಿಲ್ಲ. ದೇವತೆಗಳು ಸತ್ಯವನ್ನೇ ಆಶ್ರಯಿಸುವರು; ಮನುಷ್ಯರು ಅನೃತವನ್ನಾಚರಿಸುವರು. "ಇಂದಿನಿಂದ ನಾನು ಅಸತ್ಯಾಚರಣೆಯನ್ನು ಬಿಟ್ಟು ಸತ್ಯವ್ರತವನ್ನವಲಂಬಿಸುವೆನು" ಎಂಬೀ ದೃಢಸಂಕಲ್ಪದಿಂದ ಮನುಷ್ಯನು ಕ್ರಮೇಣ ದೇವತ್ವವನ್ನು ಹೊಂದಬಲ್ಲನು.

ಏತದ್ಧ ವೈ ದೇವಾ ವ್ರತಂ ಚರಂತಿ ಯತ್ಸತ್ಯಂ ತಸ್ಮಾತೇ ಯಶೋಯಶೋಹ ಭವತಿ ಯ ಏವಂ ವಿದ್ವಾನ್ ಸತ್ಯಂ ವದತಿ ||೧|೧|೧|೫||

ಸತ್ಯರೂಪೀ ವ್ರತವನ್ನು ದೇವತೆಗಳು ಚೆನ್ನಾಗಿ ಪರಿಪಾಲಿಸುತ್ತಾರೆ. ಆದ್ದರಿಂದ ಅವರು ಯಶಸ್ವಿಗಳಾಗಿರುವರು. ಹೀಗೆ ಯಾರು ತಿಳಿದಿದು ಸತ್ಯವನ್ನೇ ನುಡಿಯುವರೋ ಅವರೂ ಕೀರ್ತಿಶಾಲಿಗಳಾಗುವರು.

ಯೋ ವೈ ಸ ಧರ್ಮಃ ಸತ್ಯಂ ವೈ ತತ್ ||೧೪|೪|೨|೨೬||

ಯಾವುದು ಧರ್ಮವೆಂದು ಹೆಸರಿಸಲ್ಪಡುವುದೋ ಅದು ನಿಶ್ಚಯವಾಗಿ ಸತ್ಯಾಚರಣೆಯೇ ಇರುವುದಲ್ಲದೆ ಬೇರೇನಿಲ್ಲ.

## ೨. ಬ್ರಾಹ್ಮಣನ ಮಹತ್ತ್ವ

ತದ್ಧ್ಯೇವ ಬ್ರಾಹ್ಮಣೇನೈಷ್ಟವ್ಯಂ ಯದ್ ಬ್ರಹ್ಮವರ್ಚಸೀ ಸ್ಯಾದಿತಿ ||೧|೯|೩|೧೬||

ಬ್ರಾಹ್ಮಣನು ತಾನು ಬ್ರಹ್ಮತೇಜಸ್ಸಿನಿಂದ—ಜ್ಞಾನಪ್ರಕಾಶದಿಂದ ಯುಕ್ತನಾಗಿರಲು ಸದಾ ಕಾಲವೂ ಯತ್ನಿಸುತ್ತಿರಬೇಕು.

ಯೋ ವೈ ಬ್ರಾಹ್ಮಣಾನಾಮನೂಚಾನತಮಃ ಸ ಏಷಾಂ ವೀರ್ಯವತ್ತಮಃ ॥೪।೬।೬।೫॥

ಬ್ರಾಹ್ಮಣರಲ್ಲಿ ಯಾವನು ಎಲ್ಲರಿಗಿಂತಲೂ ಹೆಚ್ಚಿನ ಜ್ಞಾನಶಾಲಿಯಾಗಿರುವನೋ ಆತನೇ ಹೆಚ್ಚಿನ ಪರಾಕ್ರಮಶಾಲಿಯಿರುವನು. ಅಂದರೆ ವಯಸ್ಸು, ಸಂಪತ್ತು, ಬಾಹುಬಲ— ಇವೆಲ್ಲವುಗಳಿಗಿಂತ ಜ್ಞಾನವೇ ಹೆಚ್ಚಿನ ಪ್ರಭಾವಶಾಲಿಯಿರುವುದು.

ಏತದ್ಧ ತ್ವೇವಾನವಕ್ಲೃಪ್ತಂ ಯತ್ ಕ್ಷತ್ರಿಯೋಽ ಬ್ರಾಹ್ಮಣೋ ಭವತಿ, ಯದ್ಧ ಕಿಂಚ ಕರ್ಮ ಕುರುತೇಽ ಪ್ರಸೂತಂ ಬ್ರಹ್ಮಣಾ ಮಿತ್ರೇಣ ನ ಹೈವಾಽಸ್ಮೈ ತತ್ ಸಮೃಧ್ಯತೇ ತಸ್ಮಾದು ಕ್ಷತ್ರಿಯೇಣ ಕರ್ಮ ಕರಿಷ್ಯಮಾಣೇನೋಪಸರ್ತವ್ಯ ಏವ ಬ್ರಾಹ್ಮಣಃ ಸಂ ಹೈವಾಽಸ್ಮೈ ತದ್ ಬ್ರಹ್ಮಪ್ರಸೂತಂ ಕರ್ಮರ್ಧ್ಯತೇ ॥೪।೧।೪।೬॥

ಕ್ಷತ್ರಿಯ ಅರಸನು ಜ್ಞಾನಿಯಾದ ಬ್ರಾಹ್ಮಣನ ನೆರವಿಲ್ಲದೆ ಕಾರ್ಯವನ್ನು ನಿರ್ವಹಿಸುವುದು ಅಯುಕ್ತವಿರುವುದು. ಹಿತೈಷಿಯಾದ ಬ್ರಾಹ್ಮಣನ ಮಾರ್ಗದರ್ಶನವಿಲ್ಲದೆ ಮಾಡಲ್ಪಡುವ ಅರಸನ ಯಾವುದೇ ಕಾರ್ಯವೂ ಸಫಲತೆಯನ್ನು ಹೊಂದಲಾರದು. ಆದಕಾರಣ ಕ್ಷತ್ರಿಯ ಅರಸನು ರಾಜ್ಯಭಾರ ನಿರ್ವಹಣೆ ಮುಂತಾದ ಮಹತ್ವದ ಕಾರ್ಯದಲ್ಲಿ ಜ್ಞಾನಿಯಾದ ಬ್ರಾಹ್ಮಣನ ನೆರವನ್ನು ಆಶ್ರಯಿಸಬೇಕು. ಆತನ ನಿರ್ದೇಶದಂತೆ ಆಚರಿಸಲ್ಪಡುವ ಕಾರ್ಯವು ನಿಶ್ಚಯವಾಗಿ ಸುಸಂಪನ್ನವಾಗುವುದು.

ಏಷ ವೋಽಮೀ ರಾಜಾ ಸೋಮೋಽಸ್ಮಾಕಂ ಬ್ರಾಹ್ಮಣಾನಾಂ ರಾಜೇತಿ ತದಸ್ಮಾ ಇದಂ ಸರ್ವಮಾದ್ಯಂ ಕರೋತಿ ಬ್ರಾಹ್ಮಣಮೇವಾಪೋದ್ಧರತಿ ತಸ್ಮಾದ್ ಬ್ರಾಹ್ಮಣೋಽನಾದ್ಯಃ ಸೋಮರಾಜಾ ಹಿ ಭವತಿ ॥೫।೩।೩।೧೨॥

“ಈತನು ನಿಮಗೆಲ್ಲರಿಗೂ ಅರಸನು, ಬ್ರಹ್ಮನಿಷ್ಠರಾದ ನಮಗೆ ಪರಮಾತ್ಮನೆ ಅರಸನು” ಎಂಬುದಾಗಿ ಬ್ರಾಹ್ಮಣರನ್ನುಳಿದು ಎಲ್ಲರನ್ನೂ ಕ್ಷತ್ರಿಯ ಅರಸನ ಅಧಿಕಾರಕ್ಕೊಳಪಡಿಸಲಾಗಿದೆ. ಬ್ರಾಹ್ಮಣನಾದರೋ ಈಶ್ವರೀಯ ಶಾಸನದಂತೆ ನಡೆಯುವವನಿದ್ದು ಕ್ಷತ್ರಿಯನ ಅಂಕಿತಕ್ಕೊಳಪಡಲಾರನು.

## ೩. ಕ್ಷತ್ರಿಯ ವರ್ಣ ಮತ್ತು ಪ್ರಜಾಪ್ರಭುತ್ವ

ಯುದ್ಧಂ ವೈ ರಾಜನ್ಯಸ್ಯ ವೀರ್ಯಮ್ ||೧೩|೧|೫|೬||

ಯುದ್ಧದಲ್ಲೇ ಕ್ಷತ್ರಿಯನ ಬಲವು ಪ್ರದರ್ಶಿತವಾಗುವುದು.

ಯದೇವ ಸಾಧುವದೇದ್ಯತ್ ಸಾಧು ಕುರ್ಯಾತ್ ತಸ್ಮೈವಾಽಏಷಚ ಶ್ರೋತ್ರಿಯಶ್ಚೇತೌ ಹ ವೈ ದ್ವೌ ಮನುಷ್ಯೇಷು ಧೃತವ್ರತೌ ||೫|೪|೪|೫||

ರಾಜನು ಸಾಧುವಾದುದನ್ನೇ ನುಡಿಯಬೇಕು; ಜನಹಿತಕಾರಿಯಾದ ಕೃತಿಯನ್ನೇ ಎಸಗಬೇಕು. ಈ ಕಾರಣದಿಂದಲೇ ರಾಜನೂ ಶ್ರೋತ್ರಿಯ ಬ್ರಾಹ್ಮಣನೂ ಮನುಷ್ಯರ ಮಧ್ಯೆ ವ್ರತಧಾರಿಗಳಾಗಿರುವರು.

ಇಮಾ ವಿಶಃ ಕ್ಷತ್ರಿಯಾಯ ಬಲಿಂ ಹರಂತಿ.... ಕ್ಷತ್ರಿಯಸ್ಯೈವ ವಶೇ ಸತಿ ವೈಶ್ಯಂ ಪಶವ ಉಪತಿಷ್ಠಂತೇ ||೧|೩|೨|೫||

ಕೃಷಿ, ಗೋರಕ್ಷೆ, ವಾಣಿಜ್ಯಾದಿಗಳನ್ನು ನಡೆಯಿಸುವವರು ಕ್ಷತ್ರಿಯ ಅರಸನಿಗೆ ಕಾಣಿಕೆಗಳನ್ನು ಸಲ್ಲಿಸುವರು. ಏಕೆಂದರೆ ಕ್ಷತ್ರಿಯನ ಸಂರಕ್ಷಣೆಯಲ್ಲಿದ್ದೇ ಅವರು ಪಶುಸಂಪತ್ತು ಮುಂತಾದ್ದನ್ನು ಹೊಂದಬಲ್ಲರು.

ತಸ್ಮಾದುಪರ್ಯಾಸೀನಂ ಕ್ಷತ್ರಿಯಮಧಸ್ತಾದಿಮಾಃ ಪ್ರಜಾ ಉಪಾಸತೇ ||೧|೩|೪|೧೫||

ಆದಕಾರಣ ರಾಜ್ಯಪರಿಪಾಲನೆಯ ಸರ್ವೋಚ್ಚ ಸ್ಥಾನದಲ್ಲಿ ವಿರಾಜಮಾನನಿರುವ ಕ್ಷತ್ರಿಯ ಅರಸನನ್ನು ಪ್ರಜೆಗಳೆಲ್ಲರೂ ನಮ್ರತೆಯಿಂದ ಓಲೈಸುವರು.

ಯಸ್ಮೈವೈ ರಾಜಾನೋ ರಾಜ್ಯಮನುಮನ್ಯಂತೇ ಸ ರಾಜಾ ಭವತಿ ನಸಯಸ್ಮೈನ ||೯|೩|೪|೫||

ರಾಜನನ್ನು ಆರಿಸುವ ಅಧಿಕಾರವುಳ್ಳ ಜನನೇತೃಗಳು ಯಾವನ ರಾಜ್ಯಶಾಸನವನ್ನು ಅನುಮೋದಿಸುವರೋ ಆತನೇ ರಾಜನಾಗಿರಬಲ್ಲನಲ್ಲದೆ ಇತರರಾರೂ ಅಲ್ಲ. ಅರ್ಥಾತ್ ರಾಜನು ಪ್ರಜೆಗಳಿಂದಲೇ ಆರಿಸಲ್ಪಡುವನು.

## ೪. ಪುರುಷನ ಆಯುಷ್ಯ

ಶತಾಯುರ್ವಾ ಅಯಂ ಪುರುಷಃ ಶತತೇಜಾಃ ಶತವೀರ್ಯಾಃ || ||೫|೪|೧|೧೩||

ನಿಶ್ಚಯವಾಗಿ ಮನುಷ್ಯನು ನೂರು ವರ್ಷ ಬಾಳುವವನೂ ನೂರು ಬಗೆಯ ತೇಜಸ್ಸುಳ್ಳವನೂ ನೂರ್ವರ್ಡಿಯಾದ ಪರಾಕ್ರಮವುಳ್ಳವನೂ ಆಗಿರುವನು.

ಅಪಿ ಹಿ ಭೂಯಾಂಸಿ ಶತಾದ್ವರ್ಷೇಭ್ಯಃ ಪುರುಷೋ ಜೀವತಿ ॥ ॥೧।೯।೩।೧೯॥

ಮನುಷ್ಯನು ನೂರುವರ್ಷಗಳಿಗಿಂತಲೂ ಹೆಚ್ಚುಕಾಲ ಬದುಕಿರಬಲ್ಲನು.

ಏತದ್ವೈ ಮನುಷ್ಯಸ್ಯಾಮೃತತ್ವಂ ಯತ್ ಸರ್ವಮಾಯುರೇತಿ ॥ ॥೯।೫।೧।೧೦॥

ಪರಿಪೂರ್ಣ ಆಯುಷ್ಯವನ್ನು ಅನುಭವಿಸುವುದೆಂಬುದು ನಿಶ್ಚಯವಾಗಿ ಮನುಷ್ಯನ ಅಮರತ್ವವಿರುವುದು.

## ೫. ಆರೋಗ್ಯಕರ ಭೋಜನ

ನೈವ ದೇವಾ ಅತಿಕ್ರಮಂತಿ ನ ಪಿತರೋ ನ ಪಶವೋ ಮನುಷ್ಯಾ ಏವೈಕೇಽತಿಕ್ರಾಮಂತಿ ತಸ್ಮಾದ್ಯೋ ಮನುಷ್ಯಾಣಾಂ ಮೇದ್ಯತ್ಯಶುಭೇ ಮೇದ್ಯತಿ ವಿಹೂರ್ಚ್ಛತಿ ಹಿ ನ ಹ್ಯಯುಸಾಯ ಚನ ಭವತ್ಯನೃತಂ ಹಿ ಕೃತ್ವಾ ಮೇದ್ಯತಿ ತಸ್ಮಾದು ಸಾಯಂಪ್ರಾತರಾಶ್ಯೇವಸ್ಯಾತ್ ಸ ಯೋ ಹೈವಂ ವಿದ್ವಾನ್ ಸಾಯಂಪ್ರಾತರಾಶೀ ಭವತಿ ಸರ್ವಂ ಹೈವಾಯುರೇತಿ ॥೨।೪।೨।೬॥

ದೇವತೆಗಳು ಋತುನಿಯಮಗಳನ್ನು ಅತಿಕ್ರಮಿಸುವುದಿಲ್ಲ, ಪಿತೃಗಳೂ ಪಶುಗಳೂ ಋತುನಿಯಮಗಳನ್ನು ಭಂಗಿಸುವುದಿಲ್ಲ, ಮನುಷ್ಯರು ಮಾತ್ರವೇ ಅತಿಕ್ರಮಿಸುತ್ತಾರೆ. ಆದಕಾರಣ ಮನುಷ್ಯರಲ್ಲಿ ಯಾವನು ವಿಶೇಷವಾಗಿ ಕೊಬ್ಬಿರುವನೋ ಆತನು ಮುಗ್ಗರಿಸುವನು, ಚೆನ್ನಾಗಿ ನಡೆಯಲೂ ಅಸಮರ್ಥನಿರುವನು. ಅನೃತದಿಂದಾಗಿ ಅಂದರೆ ಅನೇಕ ಸಾರಿ ಉಂಡು ತಿಂದು ಸ್ಥೂಲನಾಗಿರುವನು. ಆದಕಾರಣ ಬೆಳಿಗ್ಗೆ ಮತ್ತು ಸಾಯಂಕಾಲ (ಎರಡು ಕಾಲಗಳಲ್ಲೇ) ಉಣ್ಣುವವನಾಗಬೇಕು. ಹೀಗೆ ತಿಳಿದಿರುತ್ತ ಸಾಯಂ ಪ್ರಾತಃಕಾಲಗಳಲ್ಲಿ ಮಾತ್ರವೇ ಉಣ್ಣುವವನು ನೂರು ವರ್ಷಕ್ಕೂ ಮೀಕ್ಕಿದ ಪೂರ್ಣಾಯುಸ್ಸನ್ನು ಹೊಂದುವನು.

ಅಶಿವ ಇವ ವಾ ಏಷ ಭಕ್ಷೋ ಯತ್ಸುರಾ ॥೧೨।೮।೧।೫॥

ಮದ್ಯಪಾನವು ನಿಶ್ಚಯವಾಗಿ ಅಕಲ್ಯಾಣಕರವಿರುವುದು, ಆದ್ದರಿಂದ ನಿಷಿದ್ಧವಿರುವುದು.

ಯದಾ ವರ್ಷತ್ಯಥೌಷಧಯೋ ಜಾಯಂತೇ ಓಷಧೀರ್ಜಗ್ಧ್ವಾಪ ಪೀತ್ವಾ ತತ ಏಷರಸಃ ಸಂಭವತಿ ॥೧।೩।೭।೨೫॥

ವೃಷ್ಟಿಯಿಂದಾಗಿ ಓಷಧಿವನಸ್ಪತಿಗಳು ಬೆಳೆಯುವುವು, ಅವುಗಳನ್ನು ಗೋವುಗಳೇ ಮುಂತಾದ ಪಶುಗಳು ಮೇಂದು ನೀರನ್ನು ಕುಡಿದು ತಮ್ಮ ಕೆಚ್ಚಲಲ್ಲಿ ಹಾಲನ್ನು ಉತ್ಪಾದಿಸುವುವು; ಆದ್ದರಿಂದ ಹಾಲು ಓಷಧಿಗಳ ಸಾರವಾಗಿದ್ದು ಗ್ರಾಹ್ಯವಿರುವುದು.

## ೬. ಗಾರ್ಹಸ್ಥ್ಯ ಮತ್ತು ಸ್ತ್ರೀ

ಅರ್ಧೋ ಹ ವಾ ಏಷ ಆತ್ಮನೋ ಯ ಜ್ಜಾಯಾ ತಸ್ಮಾದ್ಯಾವಜ್ಜಾಯಾಂ ನ ವಿಂದತೇ ನೈವ ತಾವತ್ಪ್ರಜಾಯತೇಽಸರ್ವೋ ಹಿ ತಾವದ್ಭವತ್ಯಥ ಯದೈವ ಜಾಯಾಂ ವಿಂದತೇಽಥ ಪ್ರಜಾಯತೇ ತರ್ಹಿ ಹಿ ಸರ್ವೋ ಭವತಿ॥ ॥೫।೨।೧।೧೦॥

ಪತ್ನಿಯು ಪುರುಷನ ಶರೀರಾರ್ಧದಂತಿರುವಳು, ಆದ್ದರಿಂದ ಪತ್ನಿಯನ್ನು ದೊರಕಿಸಿಕೊಳ್ಳುವ ತನಕ ಪುರುಷನು ಗಾರ್ಹಸ್ಥ್ಯದಲ್ಲಿ ಸಂಪನ್ನನಾಗಲಾರನು; ಅಪೂರ್ಣನೆನಿಸಿಕೊಳ್ಳುವನು. ಪತ್ನಿಯನ್ನು ಹೊಂದಿದ ಬಳಿಕ ಆತನ ಗಾರ್ಹಸ್ಥ್ಯವು ಪರಿಪೂರ್ಣವಾಗುವುದು.

ಏವಮಿವ ಹಿ ಯೋಷಾಂ ಪ್ರಶಂಸಂತಿ ಪೃಥು ಶ್ರೋಣಿರ್ವಿಮೃಷ್ಟಾಂತರಾಂಸಾ ಮಧ್ಯೇ ಸಂಗ್ರಾಹ್ಯೇತಿ ॥೧।೨।೫।೧೬॥

ಸ್ಥೂಲಾಗ್ರಜಘನೆಯೂ, ಸ್ಕಂಧಗಳ ಮಧ್ಯೆ ಎದೆಯ ಮೇಲ್ಭಾಗವು ಶ್ರೋಣಿಗಿಂತ ಕೊಂಚ ಕಿರಿದಾಗುಳ್ಳವಳೂ ಬಡವಾದ ನಡುವುಳ್ಳವಳೂ ಆದ ಸ್ತ್ರೀಯನ್ನು ಎಲ್ಲರೂ ಪ್ರಶಂಸಿಸುತ್ತಾರೆ

ಪತಯೋ ಹ್ಯೇವ ಸ್ತ್ರೀಯೈ ಪ್ರತಿಷ್ಠಾ ॥೨೬।೨।೧೪॥

ಸ್ತ್ರೀಯರಿಗೆ ಪತಿಯೇ ಪರಮ ಆಶ್ರಯವಿರುವನು.

ಗೃಹಾ ವೈ ಪತ್ನ್ಯೈ ಪ್ರತಿಷ್ಠಾ ॥೩।೩।೧।೧೦॥

ಮನೆಯಲ್ಲಿದ್ದು ಪಾರಿವಾರಿಕ ಉನ್ನತಿಗಾಗಿ ಯತ್ನಿಸುವುದರಲ್ಲೇ ಸ್ತ್ರೀಯ ಪ್ರತಿಷ್ಠೆಯಿರುವುದು.

ವರುಣ್ಯಂ ವಾ ಏತತ್ ಸ್ತ್ರೀ ಕರೋತಿ ಯದನ್ಯಸ್ಯ ಸತ್ಯನ್ಯೇನ ಚರತಿ ॥೨।೫।೨।೨೦॥

ಓರ್ವನ ಭಾರ್ಯೆಯಾಗಿದ್ದು ಸ್ತ್ರೀಯು ಇನ್ನೋರ್ವನನ್ನು ಕೂಡಿಕೊಳ್ಳುವುದು ಪಾತಕವೇ ಇರುವುದು.

ತೌ ಹೋಚತುಃ। ಸುಕನ್ಯೇ ಕಮಿಮಂ ಜೀರ್ಣಿಂ ಕೃತ್ಯಾರೂಪಮುಪಶೇಷೇ ಆವಾಮನುಪ್ರೇಹೀತಿ ಸಾ ಹೋವಾಚ ಯಸ್ಮೈ ಮಾಂ ಪಿತಾದಾನ್ನೈವಾಹಂ ತಂ ಜೀವಂತಂ ಹಾಸ್ಯಾಮೀತಿ ॥೪।೧।೫।೯॥

ಅಶ್ವಿನಿಗಳು ಪ್ರಶ್ನಿಸಿದರು—“ಸುಕನ್ಯೆ! ಏಕೆ ನೀನೀ ಜರಾಗ್ರಸ್ತನೂ ಅಸಹ್ಯರೂಪನೂ ಆಗಿರುವ ಚ್ಯವನನನ್ನು ಓಲೈಸುತ್ತಿರುವಿ? ಬದಲಿಗೆ ನಮ್ಮಿರ್ವರನ್ನು ಸೇರಿಕೊಳ್ಳು.” ಸುಕನ್ಯೆಯಾದರೋ ಹೀಗೆ ಉತ್ತರವಿತ್ತಳು—“ಯಾವ ಪುರುಷನಿಗೆ ನನ್ನ ತಂದೆಯು ನನ್ನನ್ನು ವೈವಾಹಿಕ ವಿಧಿಯಂತೆ ಇತ್ತಿರುವನೋ ಆತನನ್ನು ಜೀವಿಸಿದ್ದಂತೆ ತ್ಯಜಿಸಲಾರೆನು.”

## ೭. ರೋಗನಾಶ

ಅಗ್ನಿರ್ಹಿ ರಕ್ಷಸಾಮಪಹಂತಾ ॥೧।೨।೧।೬॥

(ಹೋಮದ) ಅಗ್ನಿಯು ರೋಗಾಣುಗಳ ನಾಶಕವಿರುವುದು

ಏತೇ ವಾ ಉತ್ಪವಿತಾರೋ ಯತ್ ಸೂರ್ಯಸ್ಯ ರಶ್ಮಯಃ ॥೧।೧।೩।೬॥

ಇವೇ ಸೂರ್ಯಕಿರಣಗಳು ನಿಶ್ಚಯವಾಗಿ ಶುದ್ಧಿಕಾರಕಗಳಾಗಿವೆ.

ಸೂರ್ಯೋ ಹಿ ನಾಷ್ಟ್ರಾಣಾಂ ರಕ್ಷಸಾಮಪಹಂತಾ ॥೧।೩।೪।೮॥

ಸೂರ್ಯನ ಪ್ರಖರ ತೇಜಸ್ಸು ನಾಶಕ ಕೀಟಾಣುಗಳನ್ನು ಕೊಲ್ಲುತ್ತದೆ.

ಸಾಮ ಹಿ ನಾಷ್ಟ್ರಾಣಾಂ ರಕ್ಷಸಾಮಪಹಂತಾ ॥೪।೪।೫।೬॥

ಸಾಮಮಂತ್ರಗಳ ಸುಸ್ವರ ಗಾಯನವು ನಾಶಕ ರೋಗಾಣುಗಳನ್ನು ಕೊಲ್ಲುತ್ತದೆ.

ಯದ್ಯಪ್ಯಾಸಕ್ತ ಇವ ಮನ್ಯೇತಾಭಿಮಾತಂ ಪರೀಯಾಚ್ಛ್ರೇಯ್ಯೆ ಸೋಮಃ ಪಾಪ್ಮಾ ಯಕ್ಷ್ಮಃ ಸ ಯಥಾ ಶ್ರೇಯಸ್ಯಾಯತಿ ಪಾಪೀಯಾನ್ ಪ್ರತ್ಯವರೋಹೇದೇವಂ ಹಾಸ್ಮಾದ್ಯಕ್ಷ್ಮಃ ಪ್ರತ್ಯವರೋಹತಿ ॥೪।೧।೩।೯॥

ಒಂದೊಮ್ಮೆ ಮನಸ್ಸಿಗೆ ನೆಮ್ಮದಿಯಿಂದಿದ್ದರೆ ಮಂದವಾದ ಗಾಳಿಗೆ ಇದಿರಾಗಿ ಸಂಚರಿಸುತ್ತಿರಲಿ, ಶುದ್ಧಿಕಾರಕವಾದ ವಾಯುವು ನಿಶ್ಚಯವಾಗಿ

ಸ್ತ್ರೀರೂಪವಿರುವುದು, ರೋಗವೆಂಬುದು ಪಾಪವಿರುವದು; ಶ್ರೇಷ್ಠ ವ್ಯಕ್ತಿಯು ಬರುತ್ತಲೇ ಪಾಪಿಯಾದವನು ದೂರಸರಿಯುವಂತೆ ರೋಗವು ತೊಲಗಿ ಹೋಗುವುದು.

## ೮. ಋಣಚತುಷ್ಟಯ

ಋಣಂ ಹ ವೈ ಜಾಯತೇ ಯೋಽಸ್ತಿ । ಸ ಜಾಯಮಾನ ಏವ ದೇವೇಭ್ಯ ಋಷಿಭ್ಯಃ ಪಿತೃಭ್ಯೋ ಮನುಷ್ಯೇಭ್ಯಃ ॥೧।೭।೨।೧॥

ಪ್ರತಿಯೊಬ್ಬ ಮನುಷ್ಯನೂ ಋಣ ಚತುಷ್ಟಯದಿಂದ ಯುಕ್ತನಾಗಿ ಜನ್ಮಿಸಿರುವನು. ದೇವಋಣ, ಋಷಿಋಣ, ಪಿತೃಋಣ ಮತ್ತು ಮನುಷ್ಯ ಋಣ—ಇವೇ ನಾಲ್ಕು ಋಣಗಳು. (ಅಗ್ನಿಹೋತ್ರದಿಂದ ಅಶ್ವಮೇಧ ಪರ್ಯಂತದ ಯಜ್ಞಗಳನ್ನು ನಡೆಸುವುದರಿಂದ ದೇವಋಣವನ್ನೂ, ವೇದ ಗಳ ಅಧ್ಯಯನ—ಅಧ್ಯಾಪನಾದಿಗಳಿಂದ ಋಷಿಋಣವನ್ನೂ, ಸಮುಚಿತ ಪ್ರಜಾಪಾಲನ-ಶಿಕ್ಷಣಾದಿಗಳಿಂದ ಪಿತೃಋಣವನ್ನೂ ದಾನ, ತ್ಯಾಗ, ಪರೋಪಕಾರ, ಸೇವಾದಿಗಳಿಂದ ಮನುಷ್ಯ ಋಣವನ್ನೂ ಪರಿಹರಿಸಲೆತ್ನಿಸಬೇಕು.

## ೯. ಸಾಮಾನ್ಯ ನೀತಿ; ಸದಾಚಾರ

ದ್ವಂದ್ವಂ ವೈ ವೀರ್ಯಂ, ಯದಾ ವೈ ದ್ವೌ ಸಂರಭೇತೇ ಅಥ ತದ್ವೀರ್ಯಂ ಭವತಿ ॥೧।೧।೨।೨॥

ಒಟ್ಟಿಗೆ ಸೇರಿ ಕೆಲಸಮಾಡುವುದು ಬಲಕರವಿರುವುದು. ಇಬ್ಬರು (ಅಥವಾ ಅನೇಕ ಮಂದಿ) ಸೇರಿ ಕೆಲಸಮಾಡುವುದರಿಂದ ಆ ಕಾರ್ಯವು ಮಹತ್ತರದುದಾಗುವುದು.

ನ ಶ್ವಃಶ್ವಮುಪಾಸೀತ ಕೋ ಹಿ ಮನುಷ್ಯಸ್ಯ ಶ್ವೋ ವೇದ ॥೨।೧।೩।೯॥

ಶುಭಕಾರ್ಯವನ್ನು ಮಾಡಲಿಕ್ಕಿರುವಲ್ಲಿ ನಾಳೆ ನಾಳೆ ಎಂದು ವಿಳಂಬಿಸಬಾರದು. ಏಕೆಂದರೆ ನಾಳೆ ಮನುಷ್ಯನಿಗೇನಾಗುವುದೆಂಬುದನ್ನು ಯಾರು ತಾನೇ ತಿಳಿದಿರುವರು?

ತಸ್ಮಾನ್ನಾತಿ ಮನ್ಯೇತ ಪರಾಭವಸ್ಯ ಹ್ಯೇತನ್ಮುಖಂ ಯದತಿಮಾನಃ ॥೫।೧।೧।೧॥

ಮನುಷ್ಯನ ಅತಿಯಾಗಿ ಅಭಿಮಾನಪಡಬಾರದು. ಅತಿಯಾಗಿ ಅಭಿಮಾನವನ್ನಿರಿಸಿಕೊಳ್ಳುವುದು ನಿಶ್ಚಯವಾಗಿ ಸೋಲಿಗೆ ಕಾರಣವಾಗುವುದು.

ತನ್ನೇವಾನವಕ್ಲೃಪ್ತವತ್ । ಯೋ ಮನುಷ್ಯೇಷ್ವನಶ್ನತ್ಸು ಪೂರ್ವೋಽಶ್ನೀಯಾತ್ ॥೧।೧।೧।೮॥

ಅತಿಥಿ ಅಭ್ಯಾಗತರಿಗೆ ಉಣಬಡಿಸದೆ ಮುಂಚಿತವಾಗಿ ಉಣ್ಣುವುದು ಅಯುಕ್ತವೇ ಇರುವುದು.

ಆತ್ರೇಯ್ಯಾ ಯೋಷಿತೈನಸ್ವೀ ॥೧।೪।೫।೧೩॥

ರಜಸ್ವಲಾಸ್ತ್ರೀಯು ಸಂಗದಿಂದ ಪುರುಷನು ಪಾಪಯುಕ್ತನಾಗುವನು.

ನಿರುಕ್ತಂ ವಾ ಏನಃ ಕನೀಯೋ ಭವತಿ ॥೨।೫।೨।೨೦॥

ಪ್ರಕಟಿಸಲ್ಪಟ್ಟ ದೋಷವು ಕೊಂಚ ಕಡಿಮೆಯಾಗುವುದು. ಅರ್ಥಾತ್ ಮಾಡಿದ ತಪ್ಪನ್ನು ಬಚ್ಚಿಡದೆ ಒಪ್ಪಿಕೊಳ್ಳಬೇಕು.

ತಸ್ಮಾದು ಸುವಾಸಾ ಏವ ಬುಭೂಷೇತ್ ॥೩।೧।೨।೧೬॥

ಉತ್ತಮವಾದ ಬಟ್ಟೆಯನ್ನೇ ಸರ್ವದಾ ಧರಿಸಲಿಚ್ಛಿಸುತ್ತಿರಬೇಕು.

## ೧೦. ಯಜ್ಞದ ಮಹತ್ವ

ಅಧ್ವರೋ ವೈ ಯಜ್ಞಃ ॥೧।೨।೪।೫॥

ಹಿಂಸಾರಹಿತವಾದ ಕರ್ಮವಿಶೇಷವೇ ಯಜ್ಞವಿರುವುದು.

ಯಜ್ಞೋ ವೈ ಶ್ರೇಷ್ಠತಮಂ ಕರ್ಮ ॥೧।೭।೧।೫॥

ಯಜ್ಞವು ಅತ್ಯಂತ ಶ್ರೇಷ್ಠವಾದ ಕರ್ಮವಾಗಿರುವುದು.

ಯಜ್ಞೋ ವೈ ವಿಷ್ಣುಃ ॥೧।೭।೧।೨೧॥

ಯಜ್ಞವು ಸರ್ವವ್ಯಾಪಕಶೀಲವಿರುವುದು. ಏಕೆಂದರೆ ವೇದಿಯಲ್ಲಿ ಮಾಡಲ್ಪಟ್ಟ ಯಜ್ಞವು ಪೃಥಿವ್ಯಂತರಿಕ್ಷದ್ಯುಲೋಕಗಳನ್ನು ವ್ಯಾಪಿಸುವುದು.

ನಿಕಾಮೇ ನಿಕಾಮೇ ವೈ ತತ್ರ ಪರ್ಜನ್ಯೋ ವರ್ಷತಿ.... ಫಲವತ್ಯೋ ವೈ ತತ್ರೌಷಧಯಃ ಪಚ್ಯಂತೇ ಯತ್ರೈತೇನ ಯಜ್ಞೇನ ಯಜಂತೇ ॥೧೩।೧।೯।೧೦॥

ಯಾವ ರಾಷ್ಟ್ರದಲ್ಲಿ ಯಜ್ಞಾದಿಗಳು ಅಧಿಕವಾಗಿ ನಡೆಸಲ್ಪಡುವವೋ

ಅಲ್ಲಿ ಮಳೆಯು ಬೇಕಾದಷ್ಟು ಸುರಿಯುವುದು; ಔಷಧಿ ವನಸ್ಪತಿಗಳೂ ಚೆನ್ನಾಗಿ ಫಲಿಸುವುವು

ತಸ್ಮಾದ್ಯತ್ರೈತೇನ ಯಜ್ಞೇನ ಯಜಂತೇ ಕ್ಲೃಪ್ತಃ ಪ್ರಜಾನಾಂ ಯೋಗ ಕ್ಷೇಮೋ ಭವತಿ ||೧೩|೧|೯|೧೦||

ಆದಕಾರಣ ಎಲ್ಲಿ ಯಜ್ಞಯಾಗಾದಿಗಳನ್ನು ನಡೆಸುವರೋ ಅಲ್ಲಿ ಪ್ರಜೆಗಳ ಯೋಗಕ್ಷೇಮವು ಚೆನ್ನಾಗಿ ನಿರ್ವಹಿಸಲ್ಪಡುವುದು.

## ೧೧. ಅಗ್ನಿಹೋತ್ರ

ಅಗ್ನಿರ್ವೈ ಸರ್ವಾ ದೇವತಾಃ। ಅಗ್ನೌಹಿ ಸರ್ವಾಭ್ಯೋ ದೇವತಾ-ಭ್ಯೋ ಜುಹ್ವತಿ ||೧|೨|೬|೮||

ನಿಶ್ಚಯವಾಗಿ ಅಗ್ನಿಯು ಸರ್ವದೇವಮಯನಿರುವನು. ಏಕೆಂದರೆ ಅಗ್ನಿಯಲ್ಲೇ ಎಲ್ಲಾ ದೇವತೆಗಳಿಗೂ ಹವಿಸ್ಸು ಅರ್ಪಿಸಲ್ಪಡುವುದು.

ಸರ್ವಸ್ಮಾತ್ ಪಾಪ್ಮನೋ ನಿರ್ಮುಚ್ಯತೇ ಯ ಏವಂ ವಿದ್ವಾನಗ್ನಿ ಹೋತ್ರಂ ಜುಹೋತಿ ||೨|೩|೧|೬||

ಯಾವನು ಹೀಗೆ ತಿಳಿದಿರುತ್ತ ಅಗ್ನಿಹೋತ್ರವನ್ನು ನಡೆಸುವನೋ ಆತನು ಎಲ್ಲಾ ಬಗೆಯ ಪಾಪಗಳಿಂದ ಮುಕ್ತನಾಗುವನು.

ಏತದ್ವೈ ಜರಾಮರ್ಯಂ ಸತ್ರಂ ಯದಗ್ನಿಹೋತ್ರಂ ಜರಯಾ ವಾ ಹ್ಯೇವಾಸ್ಮಾನ್ಮುಚ್ಯಂತೇ ಮೃತ್ಯುನಾ ವಾ ||೧೨|೪|೧|೧||

ಅಗ್ನಿಹೋತ್ರವೆಂಬುದು ಗೃಹಸ್ಥಾಶ್ರಮಿಗಳು ಜರಾಮರಣ ಪರ್ಯಂತ ನಡೆಯಿಸಬೇಕಾದ ದೀರ್ಘ ಸತ್ರವಿರುವುದು. ಅಂದರೆ ಕೇವಲ ಮುಪ್ಪಿನಿಂದಾಗಲೀ ಮರಣದಿಂದಾಗಲೀ ಈ ಸತ್ರರೂಪೀ ಕರ್ತವ್ಯಕರ್ಮದಿಂದ ಬಿಡುಗಡೆಯನ್ನು ಹೊಂದಬಹುದು.

## ೧೨. ಸ್ವಾಧ್ಯಾಯ ಪ್ರಶಂಸೆ

ಪ್ರಿಯೇ ಸ್ವಾಧ್ಯಾಯ ಪ್ರವಚನೇ ಭವತೋ ಯುಕ್ತಮನಾ ಭವತ್ಯ ಪರಾಧೀನೋಽಹರಹರರ್ಥಾನ್ ಸಾಧಯತೇ, ಸುಖಂ ಸ್ವಪಿತಿ ಪರಮ ಚಿಕಿತ್ಸಕ ಆತ್ಮನೋ ಭವತೀಂದ್ರಿಯಸಂಯಮಶ್ಚೈಕಾರಾಮತಾ ಚ ಪ್ರಜ್ಞಾ

ವೃದ್ಧಿರ್ಯಶೋ ಲೋಕಪಕ್ತಿಃ ಪ್ರಜ್ಞಾ ವರ್ಧಮಾನಾ ಚತುರೋ ಧರ್ಮಾನ್ ಬ್ರಾಹ್ಮಣಮಭಿನಿಷ್ಪಾದಯತಿ ಬ್ರಾಹ್ಮಣ್ಯಂ ಪ್ರತಿರೂಪಚರ್ಯಾಂ ಯಶೋ ಲೋಕಪಕ್ತಿಂ ಲೋಕಃ ಪಚ್ಯಮಾನಶ್ಚತುರ್ಭಿರ್ಧರ್ಮೈರ್ಭಿಬ್ರಾಹ್ಮಣಂ ಭುನಕ್ತ್ಯರ್ಚಯಾ ಚ ದಾನೇನ ಚಾಜ್ಯೇಯತಯಾ ಚಾವಧ್ಯತಯಾ ಚ ॥೧೧।೫।೭।೧॥

ಅಧ್ಯಯನ— ಅಧ್ಯಾಪನಗಳೆರಡೂ ಪರಮಪ್ರಿಯವಾದುವು. ಏಕೆಂದರೆ ಇದರಿಂದ ಆತನ ಮನಸ್ಸು ತತ್ತ್ವಯುಕ್ತವಾಗುವುದು. ಯಾರ ಅಧೀನವಿರದೆ ಸ್ವತಂತ್ರನಾಗುವನು, ಪ್ರತಿದಿನವೂ ಧರ್ಮಾದಿ ಪುರುಷಾರ್ಥ ವನ್ನು ಸಾಧಿಸುವನು, ಸುಖವಾಗಿ ಜೀವಿಸುವನು, ತನ್ನ ಆತ್ಮನ ಪರಮ ಚಿಕಿತ್ಸಕನಾಗುವನು, ಇಂದ್ರಿಯಸಂಯಮಿಯಾಗುವನು ಮತ್ತು ಪರಮಾತ್ಮ ನಲ್ಲಿ ಅನವಚ್ಛಿನ್ನ ವಿಶ್ರಾಂತಿಲಾಭವನ್ನು ಹೊಂದುವನು. ಪ್ರಜ್ಞೆಯ ವೃದ್ಧಿ, ಕೀರ್ತಿ, ಐಹಿಕ ಪಾರಲೌಕಿಕ ಸುಖಗಳ ಪರಿಪಕ್ವತೆ— ಇವು ಉಂಟಾಗು ವುವು. ವರ್ಧಿಸುತ್ತಿರುವ ಪ್ರಜ್ಞೆಯು ಬ್ರಾಹ್ಮಣನನ್ನು ನಾಲ್ಕು ಧರ್ಮಗ ಳಿಂದ ಸಂಪನ್ನನಾಗಿ ಮಾಡುವುದು— ಬ್ರಾಹ್ಮಣ್ಯ, ಗುಣಾನುಸಾರ ಆಚರಣೆ, ಕೀರ್ತಿ ಮತ್ತು ಲೋಕಪರಿಪಕ್ವತೆ— ಇವುಗಳಿಂದ ಯುಕ್ತನನ್ನಾಗಿ ಮಾಡು ವುದು. ಲೋಕಪರಿಪಕ್ವತೆಯು ಈತನನ್ನು ಸತ್ಕಾರ, ದಾನ, ಹಾನಿಯಾಗ ಗೊಡದಿರುವಿಕೆ ಮತ್ತು ಅವಧ್ಯತೆಗಳೆಂಬ ನಾಲ್ಕು ಧರ್ಮಗಳಿಂದ ಪರಿ ಪಾಲಿಸುವುದು.

## ೧೩. ಪರಮಾತ್ಮ ವಿಚಾರ

ಪ್ರಜಾಪತಿರ್ಹ ವಾ ಇದಮಗ್ರ ಏಕ ಏವಾಸ । ಸ ಐಕ್ಷತ ॥೨।೨।೪।೧॥

ಈ ಜಗತ್ತು ಸೃಷ್ಟಿಸಲ್ಪಡುವ ಮುಂಚೆ ಪ್ರಜಾಪತಿ— ಪರಮಾತ್ಮ ನೊಬ್ಬನೇ ಇದ್ದನು. ಆತನು (ಪ್ರಕೃತಿಯಲ್ಲಿ) ಈಕ್ಷಣಕ್ರಿಯೆಯನ್ನು ನಡೆಸಿದನು. (ಇದರಿಂದ ವಿಕೃತಿರೂಪ ಜಗತ್ತು ಉಂಟಾಯಿತು).

ಪ್ರಜಾಪತಿರ್ವಾ ಅಮೃತಃ ॥೬।೩।೧।೧೭॥

ಪರಮಾತ್ಮನು ಅಮರ, ಅಜರ, ಅನಾದ್ಯನಂತನಿರುವನು.

ಏತದ್ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತ್ಯಸ್ಥೂಲಮನಣ್ವ ಹ್ರಸ್ವಮದೀರ್ಘಮಲೋಹಿತಮಸ್ನೇಹಮಚ್ಛಾಯಮತಮೋಽವಾಯ್ವ

ಸಾಕಾರಮಸಂಗಮಸ್ಪರ್ಶಮಗಂಧಮರಸಮಚಕ್ಷುಷ್ಕಮಶ್ರೋತ್ರಮವಾಗ
ಮನೋತೇಜಸ್ಕಮಪ್ರಾಣಮಮುಖಮನಾಮಗೋತ್ರಮಜರಮಮರಮ
ಭಯಮಮೃತಮರಜೋಽಶಬ್ದಮವಿವೃತಮಸಂವೃತಮಪೂರ್ವಮನಪರ
ಮನಂತರಮಬಾಹ್ಯಂ ನ ತದಶ್ನೋತಿ ಕಂಚನ ನ ತದಶ್ನೋತಿ ಕಶ್ಚನ
||೧೪|೬|೮|೮||

ಯಾಜ್ಞವಲ್ಕ್ಯರು ಗಾರ್ಗಿಯ ಪ್ರಶ್ನೆಗೆ ಉತ್ತರವಾಗಿ ಹೇಳಿದರೇನೆಂದರೆ—ಹೇ ಗಾರ್ಗಿ! ಈ ಅವಿನಾಶಿಯಾದ ಪರಮಾತ್ಮನನ್ನೇ ಬ್ರಹ್ಮವಿದರಾದ ಜ್ಞಾನಿಗಳು ಹೀಗೆ ವರ್ಣಿಸುವರು—ಆತನು ಸ್ಥೂಲನೂ ಅಲ್ಲ, ಸೂಕ್ಷ್ಮನೂ ಅಲ್ಲ, ಹ್ರಸ್ವವೂ ಅಲ್ಲ, ದೀರ್ಘನೂ ಆಗಿಲ್ಲ, ಅಗ್ನಿಯಂತೆ ಲೋಹಿತನೂ ಆಗಿಲ್ಲ, ಸ್ನೇಹವುಳ್ಳವನೂ ಆಗಿಲ್ಲ; ಆವರಣರಹಿತನೂ, ಅಂಧಕಾರರಹಿತನೂ ಆಗಿರುವನು. ಬಾಹ್ಯ ವಾಯುವಿನಿಂದ ಆವೃತನಾಗಿಲ್ಲ, ಆಕಾಶರಹಿತನಿರುವನು. ಸಂಗರಹಿತನೂ, ಪಂಚೇಂದ್ರಿಯವರ್ಜಿತನೂ ವಾಙ್ಮನೋರಹಿತನೂ ಆಗಿರುವನು. ತೇಜೋರಹಿತನೂ ಪ್ರಾಣರಹಿತನೂ ಅಮುಖನೂ ನಾಮಗೋತ್ರರಹಿತನೂ ಜರಾಮರಣರಹಿತನೂ ಅಭಯ-ಅಮೃತನೂ ಆಗಿರುವನು. ಶಬ್ದರಹಿತನೂ ನಿರ್ಮಲನೂ ಅವಿವೃತನೂ ಅಸಂವೃತನೂ ಅನಾದ್ಯನಂತನೂ ಛಿದ್ರರಹಿತನೂ ಆಗಿರುವನು. ಅಲ್ಲದೆ ಆತನು ಭೋಗಗಳನ್ನು ಭೋಗಿಸುವ ಭೋಕ್ತೃವೂ ಆಗಿಲ್ಲ; ಭೋಗ್ಯವಸ್ತುವೂ ಆಗಿಲ್ಲ.

ಯೋವಾಽಏತದಕ್ಷರಮವಿದಿತ್ವಾ ಗಾರ್ಗಿ । ಅಸ್ಮಿಂಲ್ಲೋಕೇ ಜುಹೋತಿ
ದದಾತಿ ತಪಸ್ತಪ್ಯತಿ ಬಹೂನಿ ವರ್ಷಸಾಹಸ್ರಾಣ್ಯಂತವಾನೇವಾಸ್ಯ ಸ
ಲೋಕೋ ಭವತಿ ಯೋವಾಽಏತದಕ್ಷರಮವಿದಿತ್ವಾ ಗಾರ್ಗ್ಯಸ್ಮಾಲ್ಲೋಕಾ
ತ್ ಪ್ರೈತಿ ಸ ಕೃಪಣೋಽಥ ಯ ಏತದಕ್ಷರಂ ವಿದಿತ್ವಾಸ್ಮಾಲ್ಲೋಕಾತ್
ಪ್ರೈತಿ ಸ ಬ್ರಾಹ್ಮಣಃ ||೧೪|೬|೮|೧೦||

ಹೇ ಗಾರ್ಗಿ! ಯಾವನು ಈ ಅವಿನಶ್ವರನಾದ ಪರಮಾತ್ಮನನ್ನು ತಿಳಿಯದೆ ಈ ಲೋಕದಲ್ಲಿ ಹೋಮ ಮತ್ತು ದಾನವನ್ನು ಮಾಡುವನೋ ಅಥವಾ ಅನೇಕ ಸಹಸ್ರ ವರ್ಷ ಪರ್ಯಂತ ತಪಸ್ಸನ್ನೇ ಆಚರಿಸುವನೋ ಆತನಿಗೆ ಅದರಿಂದ ದೊರೆಯುವ ಲೋಕಾಂತರ ಸುಖವೆಲ್ಲವೂ ಅಂತವುಳ್ಳದೇ

ಆಗುವುದು. ನಿಶ್ಚಯವಾಗಿ ಯಾವನು ಈ ಅವಿನಾಶ ಪರಮಾತ್ಮನನ್ನು ತಿಳಿಯದೆ ಈ ಲೋಕವನ್ನು ತ್ಯಜಿಸುವನೋ ಅವನು ಕೃಪಣನಿರುವನು. ಅಂದರೆ ಆತನು ಮೋಕ್ಷಭಾಗಿಯಾಗಲಾರನು. ಇನ್ನು ಯಾವನು ಅವಿನಾಶಿಯಾದ ಈ ಪರಮಾತ್ಮನನ್ನು ತಿಳಿದು ಈ ಲೋಕದಿಂದ ಪ್ರಸ್ಥಾನವನ್ನು ಮಾಡುವನೋ ಆತನೇ ಬ್ರಾಹ್ಮಣ=ಬ್ರಹ್ಮವೇತ್ತ್ರನಾಗಿರುವನು.

## ೧೪. ಪುನರ್ಜನ್ಮಸಿದ್ಧಾಂತ

ಸ ಯತ್ರಾಣಿಮಾನಂ ನ್ಯೇತಿ ಜರಯಾ ವೋಪತಪತಾ ವಾಣಿಮಾನಂ ನಿಗಚ್ಛತಿ ಯಥಾಮ್ರಂ ವೋದುಂಬರಂ ವಾ ಪಿಪ್ಪಲಂ ವಾ ಬಂಧನಾತ್ ಪ್ರಮುಚ್ಯೇತ್ಯೆವಮೇ ವಾಯಂ ಶಾರೀರ ಆತ್ಮ್ಯಭ್ಯೋಽಂಗೇಭ್ಯಃ ಸಂಪ್ರಮುಚ್ಯ ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾದ್ರವತಿ ಪ್ರಾಣಾಯ್ಯೆವ ॥ ।'೧೪।೭।೧।೪೧॥

ಪುರುಷನು ಯಾವಾಗ ವಾರ್ಧಿಕ್ಯದಿಂದ ಕೃಶತೆಯನ್ನು ಹೊಂದುವನೋ ಅಥವಾ ಯಾವುದೇ ದುಃಖಕಾರಕ ರೋಗದಿಂದ ಬಳಲಿ ನಿಃಶಕ್ತನಾಗುವನೋ ಆಗ ಹೇಗೆ ಆಮ್ರಫಲ, ಔದುಂಬರ ಅಥವಾ ಅಶ್ವತ್ಥದ ಫಲವು ತೊಟ್ಟಿನಿಂದ ಕಳಚಿ ಉದುರುವುದೋ ಹಾಗೆಯೇ ಶರೀರಾಂತರ್ಗತ ಆತ್ಮನು ಹಸ್ತಪಾದಾದಿಕ ಅವಯವಗಳಿಂದ ಬಿಡುಗಡೆ ಹೊಂದಿದವನಾಗಿ ಪುನಃ ಕರ್ಮಫಲಭೋಗಕ್ಕಾಗಿ ಹೇಗೆ ಬಂದಿದ್ದನೋ ಹಾಗೆಯೇ ನವೀನ ಜನ್ಮಧಾರಣೆಗಾಗಿ ತೆರಳುತ್ತಾನೆ.

ತಂ ವಿದ್ಯಾಕರ್ಮಣೀ ಸಮನ್ವಾರಭೇತೇ ಪೂರ್ವಪ್ರಜ್ಞಾಚ ॥ ॥೧೪।೭।೨'೩॥

(ಹಾಗೆ ತೆರಳುವಾಗ) ವಿದ್ಯೆ (ವಿಜ್ಞಾನ) ಮತ್ತು ಕರ್ಮಗಳು ಆತನನ್ನು ಹಿಂಬಾಲಿಸುವುವು ಮತ್ತು ಪೂರ್ವಜನ್ಮಾನುಭೂತ ಬುದ್ಧಿಯೂ ಜತೆಯಲ್ಲಿರುವುದು.

## ೧೫ .ಮುಕ್ತಿ

ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಶ್ರಿತಾಃ।
ಅಥಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ॥೧೪।೭।೨೯॥

ಈಶ್ವರಸಾಕ್ಷಾತ್ಕಾರದಿಂದ ಪುರುಷರ ಹೃದಯದಲ್ಲಿ ನೆಲಸಿರುವ ಕಾಮನೆಗಳೆಲ್ಲವೂ ಎಂದಿಗೆ ತೊಲಗಿಹೋಗುವವೋ ಆಗ ಆತನು ಜನ್ಮ ಮರಣರಹಿತವಾದ ಅಮರತ್ವವನ್ನು ಹೊಂದುವನು; ಹಾಗೂ ಜೀವನ್ಮುಕ್ತನಿದ್ದು ಬ್ರಹ್ಮಾನಂದವನ್ನು ಅನುಭವಿಸುವನು.

## ೧೬. ಮುಕ್ತಿಸಾಧನ

ತಮೇತಂ ವೇದಾನುವಚನೇನ ವಿವಿದಿಷಂತಿ । ಬ್ರಹ್ಮಚರ್ಯೇಣ ತಪಸಾ ಶ್ರದ್ಧಯಾ ಯಜ್ಞೇನಾನಾಶಕೇನ ಚೈತಮೇವ ವಿದಿತ್ವಾ ಮುನಿರ್ಭವತ್ಯೇತಮೇವ ಪ್ರವ್ರಾಜಿನೋ ಲೋಕಮೀಪ್ಸಂತಃ ಪ್ರವ್ರಜಂತಿ ॥ ॥೧೪।೪।೨೨॥

ಸರ್ವೇಶ್ವರನಾದ ಈ ಪರಮಾತ್ಮನನ್ನು ಮುಮುಕ್ಷುಗಳು ವೇದಗಳ ಅನುವಚನದಿಂದ ತಿಳಿಯಲಿಚ್ಛಿಸುತ್ತಾರೆ. ಹಾಗೂ ಬ್ರಹ್ಮಚರ್ಯದಿಂದ ತಪಸ್ಸು, ಶ್ರದ್ಧೆ, ಯಜ್ಞ ಮತ್ತು ಅನಶನ ವ್ರತಗಳಿಂದ ಈತನನ್ನೇ ತಿಳಿದು ಮುನಿಯಾಗುವರು. ಬ್ರಹ್ಮಲೋಕವನ್ನಿಚ್ಛಿಸುತ್ತ ಸನ್ಯಾಸಿಗಳು ಈತನನ್ನೇ ಪ್ರಾಪ್ತಿಸುವರು.

ವಿದ್ಯಯಾ ತದಾರೋಹಂತಿ ಯತ್ರ ಕಾಮಾಃ ಪರಾಗತಾಃ । ನತತ್ರ ದಕ್ಷಿಣಾಯಂತಿ ನಾವಿದ್ವಾಂಸ ಸ್ತಪಸ್ವಿನ ಇತಿ ॥೧೦।೫।೪।೧೬॥

ಎಲ್ಲಿ ಯಾವುದೇ ತೆರನ ಬಯಕೆಗಳೂ ಉತ್ಪನ್ನವಾಗುವುದಿಲ್ಲವೋ ಅಂತರ್ ಆನಂದಘನ ಪರಾತ್ಪರಪದವಿಯನ್ನು ಕೇವಲ ಜ್ಞಾನದಿಂದಲೇ ತಲುಪುವರಲ್ಲದೆ ಜ್ಞಾನವಿರಹಿತಕರ್ಮಗಳಿಂದಲ್ಲ ಅಥವಾ ತಪಸ್ಸಿನಿಂದಲೂ ಅಲ್ಲ.



Edited, Printed & Published by K. V. Shenoy
at The Prabhat Printers, Ltd., Mangalore.